# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **2281**

ಮಾನ್ಯ ಸದಸ್ಯರು ಹೆಸರು : ಶ್ರೀ ಬಿ. ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 21/03/2022

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು.

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ವೈದ್ಯರು ಹಾಗೂ ಇತರೆ ಸಿಬ್ಬಂದಿಗಳ ಸಂಖ್ಯೆ ಎಷ್ಟು; (ವಿವರ ನೀಡುವುದು).</td><td>ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ವೈದ್ಯರು ಹಾಗೂ ಇತರೆ ಸಿಬ್ಬಂದಿಗಳ ವಿವರ ಈ ಕೆಳಗಿನಂತಿದೆ.-
<table>
<tr><th rowspan="2">District Name</th><th rowspan="2">Institution</th><th rowspan="2">NO</th><th rowspan="2">Cadre</th><th colspan="3">Doctors</th><th colspan="3">Other staff</th></tr>
<tr><th>San</th><th>Work</th><th>Vacant</th><th>San</th><th>Work</th><th>Vacant</th></tr>
<tr><td rowspan="2">Kalaburgi</td><td>PHC</td><td>94</td><td>GDMO</td><td>94</td><td>93</td><td>1</td><td>1057</td><td>906</td><td>151</td></tr>
<tr><td>CHC</td><td>16</td><td>Specialist, Dental, SMO</td><td>80</td><td>57</td><td>23</td><td>574</td><td>441</td><td>133</td></tr>
<tr><td rowspan="2">Yadagiri</td><td>PHC</td><td>41</td><td>GDMO</td><td>41</td><td>40</td><td>1</td><td>506</td><td>390</td><td>116</td></tr>
<tr><td>CHC</td><td>6</td><td>Specialist, Dental, SMO</td><td>30</td><td>12</td><td>18</td><td>119</td><td>85</td><td>34</td></tr>
</table></td></tr>
<tr><td>ಆ)</td><td>ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ವಿವರ ನೀಡುವುದು).</td><td>2021ರಲ್ಲಿ ಕಲಬುರಗಿ ಜಿಲ್ಲೆಗೆ 28 ತಜ್ಞ ವೈದ್ಯರು, 23 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಮತ್ತು 58 ಶುಶ್ರೂಷಕರನ್ನು ಹಾಗೂ ಯಾದಗಿರಿ ಜಿಲ್ಲೆಗೆ 12 ತಜ್ಞ ವೈದ್ಯರು, 19 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಮತ್ತು 20 ಶುಶ್ರೂಷಕರನ್ನು ನೇಮಕ ಮಾಡಲಾಗಿದೆ.<br><br>ಸಾರ್ವಜನಿಕ ಆರೋಗ್ಯದ ದೃಷ್ಟಿಯಿಂದ ಸ್ನಾತಕೋತ್ತರ/ಎಂ.ಬಿ.ಬಿ.ಎಸ್., ಪದವಿ ಪೂರೈಸಿದ ವೈದ್ಯ ಅಭ್ಯರ್ಥಿಗಳನ್ನು ಒಂದು ವರ್ಷ ಕಡ್ಡಾಯ ಸರ್ಕಾರಿ ಸೇವೆಗೆ ನೇಮಿಸಲಾಗುತ್ತಿದೆ.<br><br>ಸೇವಾನಿರತ ಸ್ನಾತಕೋತ್ತರ (ಆರ್.ಜಿ.ಹೆಚ್.ಎಸ್/ಡಿ.ಎನ್.ಬಿ/ಸಿ.ಪಿ.ಎಸ್/ಎಂ.ಪಿ.ಹೆಚ್) ವ್ಯಾಸಂಗ ಪೂರೈಸಿ ಬರುವ ತಜ್ಞ ವೈದ್ಯರನ್ನು ಖಾಲಿ ಇರುವ ತಜ್ಞರ ಹುದ್ದೆಗೆ ನೇಮಿಸಲಾಗುತ್ತಿದೆ.<br><br>ಅಗತ್ಯಕ್ಕೆ ತಕ್ಕಂತೆ ಕಾಲಕಾಲಕ್ಕೆ ನಿಯಮಾನಸಾರ ಮುಂಬಡ್ತಿ, ವರ್ಗಾವಣೆ, ನೇರ ನೇಮಕಾತಿ, ಗುತ್ತಿಗೆ ಆಧಾರದಡಿ ತಜ್ಞ ವೈದ್ಯರು, ವೈದ್ಯರು ಹಾಗೂ ಇತರೆ ಹುದ್ದೆಗಳನ್ನು ಭರ್ತಿ ಮಾಡುವ ಮೂಲಕ ಸಿಬ್ಬಂದಿಗಳ ಕೊರತೆ ಆಗದಂತೆ ಕ್ರಮವಹಿಸಲಾಗುತ್ತಿದೆ.</td></tr>
<tr><td>ಇ)</td><td>ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಅಂಬ್ಯುಲೆನ್ಸ್‌ಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು?</td><td>ವಿಶ್ವ ಆರೋಗ್ಯ ಹಾಗೂ ರಾಷ್ಟ್ರೀಯ ಆರೋಗ್ಯ ಅಭಿಯಾನದ ಮಾರ್ಗಸೂಚಿಯನ್ವಯ 2022ನೇ ಸಾಲಿನ ಜನ ಸಂಖ್ಯೆಗೆ ಆಧಾರದಂತೆ
<table>
<tr><th>ಜಿಲ್ಲೆ</th><th>ಒದಗಿಸಲಾದ ಆರೋಗ್ಯ ಸುರಕ್ಷಾ ಸೇವೆಯ ಆಂಬ್ಯುಲೆನ್ಸ್‌ಗಳ ಸಂಖ್ಯೆ</th><th>ಕೊರತೆಯಿರುವ ಆಂಬ್ಯುಲೆನ್ಸ್‌ಗಳ ಸಂಖ್ಯೆ</th></tr>
<tr><td>ಕಲಬುರಗಿ</td><td>25</td><td>4</td></tr>
<tr><td>ಯಾದಗಿರಿ</td><td>12</td><td>1</td></tr>
</table>
ಹಳೆಯ ಆಂಬ್ಯುಲೆನ್‌ಗಳ ಬದಲಾವಣೆ, 710ರಿಂದ 750ಕ್ಕೆ ಆಂಬ್ಯುಲೆನ್ಸ್‌ಗಳ ಸಂಖ್ಯೆ ಏರಿಸಲು ಮತ್ತು 337 ಹೊಸ ಆಂಬ್ಯುಲೆನ್ಸ್‌ಗಳ ಖರೀದಿ ಪ್ರಕ್ರಿಯೆ ಚಾಲ್ತಿಯಲ್ಲಿದ್ದು, ಚಾಲ್ತಿಯಲ್ಲಿರುವ ಆಂಬ್ಯುಲೆನ್ಸ್‌ಗಳ ಖರೀದಿ ಪ್ರಕ್ರಿಯೆ ಪೂರ್ಣಗೊಂಡ ನಂತರ ಆಂಬ್ಯುಲೆನ್ಸ್‌ಗಳ ಕೊರತೆ ನೀಗಿಸಲಾಗುತ್ತದೆ.</td></tr>
</table>

**ಆಕುಕ 36 ಹೆಚ್‌ಎಸ್‌ಡಿ 2022**

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು.